# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 166(303)
ಸದಸ್ಯರ ಹೆಸರು : ಶ್ರೀ ಎನ್. ಅಪ್ಪಾಜಿಗೌಡ
ಉತ್ತರಿಸುವ ದಿನಾಂಕ : 04.03.2020
ಉತ್ತರಿಸುವ ಸಚಿವರು : ಕಂದಾಯ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| (ಅ) | ಕರ್ನಾಟಕ ಭೂಸುಧಾರಣೆ ಕಾಯಿದೆಯಡಿ ವಿಧಿ 79ಎ ಮತ್ತು 79ಬಿ ಯಾವುದೇ ವ್ಯಕ್ತಿ 1.3.1974ರ ನಂತರ ಖರೀದಿಸಿದ ಜಮೀನುಗಳಿಗೆ ಅನ್ವಯಿಸುವ ಅಂಶ ಸರ್ಕಾರದ ಗಮನದಲ್ಲಿದೆಯೇ: | ಹೌದು. |
| (ಆ) | ಜಿಲ್ಲಾಧಿಕಾರಿಗಳ ಕರ್ನಾಟಕ ಭೂ ಕಂದಾಯ 1964ರ ನಿಯಮ 95(2)ರಡಿಯಲ್ಲಿ ಒಬ್ಬ ವ್ಯಕ್ತಿಯು ಭೂ ಪರಿವರ್ತನೆ ಮಾಡಿಕೊಳ್ಳಲು ಅರ್ಜಿ ಸಲ್ಲಿಸುವಾಗ ಪ್ರಶ್ನಿತ ಜಮೀನು ಖರೀದಿಸಿದ ಜಮೀನಲ್ಲದೆ ಪಿತ್ರಾರ್ಜಿತ ಅಥವಾ ಸ್ವಂತ ಜಮೀನಾಗಿದ್ದರೂ ಸಹ ಸದರಿ ಜಮೀನಿನ ಬಗ್ಗೆ ಉಪವಿಭಾಗಾಧಿಕಾರಿಗಳಿಂದ 79ಎ ಮತ್ತು 79ಬಿ ಹಿಂಬರಹ ಪಡೆದು ಲಗತ್ತಿಸಲು ನಿರ್ಬಂಧ ವಿಧಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 95(2)ರಡಿ ಕೃಷಿ ಜಮೀನನ್ನು ಕೃಷಿಯೇತರ ಉದ್ದೇಶಕ್ಕೆ ಭೂಪರಿವರ್ತನೆ ಕೋರಿದ ಜಮೀನು ದಿನಾಂಕ:01.03.1974ರಂದು ಅಥವಾ ನಂತರ ಖರೀದಿಸಿದ ಜಮೀನಾಗಿದ್ದಲ್ಲಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 79ಎ ಮತ್ತು 79ಬಿ ಉಲ್ಲಂಘನೆಯ ಬಗ್ಗೆ ಉಪವಿಭಾಗಾಧಿಕಾರಿಗಳು ವರದಿ ಸಲ್ಲಿಸಬೇಕಾಗಿರುತ್ತದೆ.<br>ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 95(2)ರಡಿ ಕೃಷಿಯೇತರ ಉದ್ದೇಶಕ್ಕೆ ಭೂಪರಿವರ್ತನೆ ಕೋರಿದ ಜಮೀನು ಪಿತ್ರಾರ್ಜಿತವಾಗಿದಲ್ಲಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 79ಎ ಮತ್ತು 79ಬಿ ಉಲ್ಲಂಘನೆಯ ಬಗ್ಗೆ ವರದಿ ಪಡೆಯುವ ಅವಶ್ಯಕತೆ ಇರುವುದಿಲ್ಲ. |
| (ಇ) | ಬಂದಿದ್ದಲ್ಲಿ, ಈ ನಿಬಂದನೆಯಿಂದ ವಿನಾಯಿತಿ ನೀಡಲು ಎಲ್ಲಾ ಜಿಲ್ಲಾಧಿಕಾರಿಗಳಿಗೆ ನಿರ್ದೇಶನವನ್ನು ನೀಡಲಾಗುವುದೇ? (ಸ್ಪಷ್ಟ ಉತ್ತರ ನೀಡುವುದು). | ಸರ್ಕಾರದ ಆದೇಶ ಸಂಖ್ಯೆ:ಕಂಇ 67 ಎಲ್‌ಜಿಪಿ 2018 ದಿನಾಂಕ: 20.02.2019ರಲ್ಲಿ ಕೃಷಿ ಜಮೀನನ್ನು ಕೃಷಿಯೇತರ ಉದ್ದೇಶಕ್ಕೆ ಭೂಪರಿವರ್ತನೆ ಪಡೆಯುವ ವಿಧಾನವನ್ನು ಸರಳೀಕರಣಗೊಳಿಸಿ ಈಗಾಗಲೇ ಆದೇಶಿಸಲಾಗಿದೆ. |

ಸಂಖ್ಯೆ: ಕಂಇ 02 ಎಲ್‌ಆರ್‌ಎಸ್ 2020

(ಆರ್. ಅಶೋಕ)
ಮಾನ್ಯ ಕಂದಾಯ ಸಚಿವರು